


# ಜ್ಯೋತಿಷ ಮಿತ್ರ

## ಆನ್‌ಲೈನ್ ದಿನಪತ್ರಿಕೆ

www.jyothishamithra.com

**ಸಂಚಿಕೆ : 1221   03-01-2022   ಸೋಮವಾರ**

ಪ್ಲವನಾಮ ಸಂವತ್ಸರ ದಕ್ಷಿಣಾಯಣ ಹೇಮಂತಋತು ಪೌಷಮಾಸ ಶುಕ್ಲಪಕ್ಷ

| ನಿತ್ಯ ಪಂಚಾಂಗ | ಸುಜ್ಞಾನ |
|---|---|
| ತಿಥಿ : ಪಾಡ್ಯ (20:31)<br>ನಕ್ಷತ್ರ : ಪೂರ್ವಾಷಾಢ (13:32)<br>ರಾಹುಕಾಲ :<br>08:18 AM - 09:44 AM<br>ಗುಳಿಕಕಾಲ :<br>02:00 PM - 03:25 PM | ಮನಸ್ಸಿನ ದುರ್ಬಲತೆಗಿಂತ ಭಯಂಕರ ಪಾಪವು ಇನ್ನೊಂದಿಲ್ಲ.<br>- ಸ್ವಾಮಿ ವಿವೇಕಾನಂದ |

# ಮಂತ್ರ ಸಂಜೀವಿನಿ

## ಧನವೃದ್ಧಿಗಾಗಿ ಸಿದ್ಧಲಕ್ಷ್ಮೀ ಮಂತ್ರ

ಓಂ ಶ್ರೀಂ ಹ್ರೀಂ ಶ್ರೀಂ ಸಿದ್ಧಲಕ್ಷ್ಮ್ಯೈ ನಮಃ ||

ಸಾಧಕರು ಪೂರ್ವಾಭಿಮುಖವಾಗಿ ಕುಳಿತು ಮಂತ್ರ ಜಪ ಮಾಡಬೇಕು. ಜಪ ಮಾಡಲು ಸ್ಫಟಿಕದ ಮಾಲೆಯನ್ನು ಉಪಯೋಗಿಸಬೇಕು. ಸಾಧನೆಯ ಕಾಲದಲ್ಲಿ ತುಪ್ಪದ ದೀಪವು ನಿರಂತರ ಉರಿಯುತ್ತಿರಬೇಕು.

ಇಪ್ಪತ್ತೊಂದು ದಿನಗಳಲ್ಲಿ ಒಂದು ಲಕ್ಷ ಜಪವನ್ನು ಪೂರ್ಣಗೊಳಿಸಬೇಕು. ಹಾಗೆ ಮಾಡಿದರೆ ನಿಶ್ಚಯ ವಾಗಿಯೂ ಅತ್ಯಧಿಕ ಧನಲಾಭವಾಗುವುದು.

## ಮಹಾಲಕ್ಷ್ಮೀ ಗಾಯತ್ರಿ ಮಂತ್ರ

ಓಂ ಮಹಾದೇವ್ಯೈ ಚ ವಿದ್ಮಹೇ |

ವಿಷ್ಣುಪತ್ನ್ಯೈ ಚ ಧೀಮಹೀ |

ತನ್ನೋ ಲಕ್ಷ್ಮೀಃ ಪ್ರಚೋದಯಾತ್ ||

ಈ ಮಂತ್ರವನ್ನು ಪ್ರತಿದಿನ ಸಂಧ್ಯಾವಂದನೆಯ ನಂತರ ನೂರೆಂಟು ಬಾರಿ ಜಪಿಸುವುದರಿಂದ ಧನವೃದ್ಧಿ ಹಾಗೂ ಕೀರ್ತಿ ಪ್ರಾಪ್ತಿಯಾಗುವುದು.



**ಜಾತಕ ವಿಮರ್ಶೆ**

# ಪಿತೃವಿನ ಆಯುಷ್ಯ ವಿಚಾರ

**ಜನನ ದಿನಾಂಕ : 04-07-1974 ಸಮಯ : 3.29PM ಸ್ಥಳ : ಉಡುಪಿ**

ಈ ಜಾತಕದಲ್ಲಿ ಪಿತೃಸ್ಥಾನವಾದ ನವಮದಲ್ಲಿ ನೀಚ ಕುಜನಿರುವನು. ಅಲ್ಲಿಗೆ ರಾಹುವಿನ ದೃಷ್ಟಿಯೂ ಇದೆ. ನವಮಾಧಿಪತಿ ಚಂದ್ರ ದ್ವಿತೀಯದಲ್ಲಿದ್ದು ಶನಿ-ರವಿ-ಬುಧರ ದೃಷ್ಟಿಗೆ ಪಾತ್ರನು. ಪಿತೃಕಾರಕ ರವಿಯು ಅಷ್ಟಮದಲ್ಲಿ ಶನಿ ಹಾಗೂ ಅಷ್ಟಮಾಧಿಪತಿಗಳ

ಯುತಿಯಲ್ಲಿರುವನು.

| | | | |
|---|---|---|---|
| | | ಶುಕ್ರ<br>ಕೇತು | ರವಿ<br>ವ.ಬುಧ ಶನಿ |
| ಗುರು | ರಾಶಿ | | ಕುಜ |
| | | | ಮಾಂದಿ |
| ಚಂದ್ರ | ಲಗ್ನ<br>ರಾಹು | | |

ಚಂದ್ರನಿಂದ ನವಮದಲ್ಲಿ ಮಾಂದಿಯಿದ್ದು ಶನಿ-ಗುರು ದೃಷ್ಟನು. ನವಮಾಧಿಪತಿ ರವಿಯು ಶತ್ರು ಹಾಗೂ ಮಾರಕಾಧಿಪತಿಯಾದ ಶನಿ ಹಾಗೂ ಬುಧಯುಕ್ತನು. ಚಂದ್ರನಿಂದ ನವಮಕ್ಕೆ ಗುರು-ಶನಿಗಳ ದೃಷ್ಟಿ ಇದೆ.

ನವಾಂಶ ಕುಂಡಲಿಯಲ್ಲಿ ನವಮಾಧಿಪತಿ ಕುಜನು

ಉಚ್ಚಾಂಶದಲ್ಲಿದ್ದರೂ ಆತನಿಗೆ ಅಷ್ಟಮಾಧಿಪತಿ ಗುರುವಿನ ದೃಷ್ಟಿ ಇದೆ. ಆ ಕುಜನಿಗೆ ಶತೃವಾದ ಬುಧನ ಯೋಗವಿದೆ. ನವಮಕ್ಕೂ ಶನಿ-ಕುಜರ ದೃಷ್ಟಿ ಇದೆ. ಪಿತೃಕಾರಕ ರವಿ ಲಗ್ನದಿಂದ ಅಷ್ಟಮದಲ್ಲೂ ಚಂದ್ರನಿಂದ ಮಾರಕ ಸ್ಥಾನದಲ್ಲಿಯೂ ಇರುವರು.

| | | | |
|---|---|---|---|
| ರವಿ | | ಶುಕ್ರ<br>ಗುರು | |
| ರಾಹು<br>ಶನಿ | ನವಾಂಶ | | |
| ವ.ಬುಧ<br>ಕುಜ | | | ಲಗ್ನ<br>ಕೇತು |
| | | | ಚಂದ್ರ<br>ಮಾಂದಿ |

ಈ ಜಾತಕನ ಶುಕ್ರದಶಾ ಗುರುಭುಕ್ತಿಯಲ್ಲಿ ತಂದೆಯು ಹೃದಯಾಘಾತದಲ್ಲಿ ಮೃತರಾದರು. ಇಲ್ಲಿ ಪಿತೃಕಾರಕ

ಅಷ್ಟಮದಲ್ಲಿದ್ದು ಆತನಿಗೆ ಉಂಟಾದ ಶನಿಯಯೋಗ ಹಾಗೂ ನವಮದಲ್ಲಿರುವ ನೀಚ ಕುಜನಿಂದಾಗಿ ಜಾತಕನು ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಳ್ಳುವಂತಾಯಿತು. ತಂದೆಗೆ ಅಕಾಲ ಮೃತ್ಯು ಬಂದೆರಗಿತು. ಇಲ್ಲಿ ಶುಕ್ರನು ಚಂದ್ರನ ನಕ್ಷತ್ರವಾದ ರೋಹಿಣಿಯಲ್ಲಿದ್ದು ಚಂದ್ರನು ಲಗ್ನದಿಂದ ನವಮಾಧಿಪತಿಯಾಗಿರುವನು. ಗುರುವು ಲಗ್ನದಿಂದ ಮಾರಕಾಧಿಪತಿಯಾಗಿರುವನು.

## ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ



ಗೌರವ ಸಂಪಾದಕರು : ಜೀವನ್ ಉಳ್ಳಾಲ್
ಸಂಪಾದಕರು : ಶ್ರೀಷ ಎಸ್.
ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.

PH : 9986671473 / 9535283535
jmonline@gmail.com www.jyothishamithra.com